# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1506

ಸದಸ್ಯರ ಹೆಸರು : ಶ್ರೀ ಎನ್.ರವಿಕುಮಾರ್
(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸ ಬೇಕಾದ ದಿನಾಂಕ : 19.03.2020

ಉತ್ತರಿಸ ಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರದ ಇಲಾಖೆಗಳಲ್ಲಿ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಸಿಬ್ಬಂದಿಗಳಿಗೆ ಯಾವ ವೇತನ ಶ್ರೇಣಿ ನೀಡಲಾಗುತ್ತಿದೆ; | ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ನೌಕರರಿಗೆ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೌಕರಿ ಭರ್ತಿ) ನಿಯಮಗಳು, 1977ರ ನಿಯಮ (3)ನ್ನು ಓದಿಕೊಂಡಂತೆ ಆಯಾ ಇಲಾಖೆಗಳಿಗೆ ಅನ್ವಯವಾಗುವಂತೆ ರಚಿಸಿದ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಆಯಾ ಇಲಾಖೆಗಳಲ್ಲಿನ ಹುದ್ದೆಗಳಿಗೆ ನಿರ್ದಿಷ್ಟ ವಿದ್ಯಾರ್ಹತೆ ಮತ್ತು ಇತರೆ ಅರ್ಹತೆ ಮತ್ತು ನಿರ್ದಿಷ್ಟ ವೇತನ ಶ್ರೇಣಿಗಳನ್ನು ನಿಗದಿಪಡಿಸಲಾಗಿರುತ್ತದೆ. ಇಲಾಖೆಗಳ ವಿವಿಧ ಹುದ್ದೆಗಳಿಗೆ ನಿಗದಿಪಡಿಸಿರುವ ವೇತನ ಶ್ರೇಣಿಗಳು ಒಂದೇ ರೀತಿಯಾಗಿರದೇ ಹುದ್ದೆಯ ಕಾರ್ಯ ಸ್ವರೂಪ, ಜವಾಬ್ದಾರಿ ಇತ್ಯಾದಿ ಅಂಶಗಳನ್ನು ಆಧರಿಸಿ ಇಲಾಖೆಯಿಂದ ಇಲಾಖೆಗೆ ಬೇರೆ ಬೇರೆ ಆಗಿರುತ್ತದೆ.<br>ಸರ್ಕಾರದ ಬೇರೆ ಬೇರೆ ಇಲಾಖೆಗಳ ವಿವಿಧ ಹುದ್ದೆಗಳಿಗೆ ನಿಯಮಾನುಸಾರ ನೇಮಕಗೊಳ್ಳುವ ನೌಕರರು ಸದರಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಹುದ್ದೆಗಳಿಗೆ ನಿಗದಿಪಡಿಸಲಾದ ವೇತನ ಶ್ರೇಣಿಗಳಲ್ಲಿ ವೇತನವನ್ನು ಪಡೆಯಲು ಅರ್ಹರಿರುತ್ತಾರೆ. ಪರಂತು, ಹುದ್ದೆಗೆ ನಿಗದಿಪಡಿಸಲಾದ ಮೂಲ ವಿದ್ಯಾರ್ಹತೆಯ ಜೊತೆಗೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ ಕಾರಣಕ್ಕೆ ನಿಗದಿಪಡಿಸಲಾದ ವೇತನ ಶ್ರೇಣಿಯನ್ನು |
| (ಆ) | ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಅಭ್ಯರ್ಥಿಗಳಿಗೆ ಒಂದೇ ರೀತಿಯ ವೇತನ ಶ್ರೇಣಿ ನೀಡಲಾಗುತ್ತದೆಯೇ? ಪೊಲೀಸ್ ಇಲಾಖೆಯ ಎಫ್‌ಎಸ್‌ಎಲ್ ವಿಭಾಗದಲ್ಲಿ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಸಿಬ್ಬಂದಿಗಳಿಗೆ ಒಂದೇ ರೀತಿಯ ವೇತನ ಶ್ರೇಣಿ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| (ಇ) | ಸರ್ಕಾರದ ಇಲಾಖೆಗಳಲ್ಲಿ ವೇತನ ಶ್ರೇಣಿಯನ್ನು ನಿಗಧಿಪಡಿಸುವಾಗ ವಿದ್ಯಾರ್ಹತೆಯನ್ನು ಮಾನದಂಡವಾಗಿ ಪರಿಗಣಿಸಲಾಗುತ್ತದೆಯೇ; ಇಲ್ಲವಾದಲ್ಲಿ, ಯಾವ ಆಧಾರದಲ್ಲಿ ವೇತನ ಶ್ರೇಣಿಯನ್ನು ನಿಗದಿಪಡಿಸಲಾಗುತ್ತಿದೆ; | |
| (ಈ) | ಪೊಲೀಸ್ ಇಲಾಖೆಯ ಎಫ್‌ಎಸ್‌ಎಲ್ ವಿಭಾಗದಲ್ಲಿ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಸಿಬ್ಬಂದಿಗಳಿಗೆ ಒಂದೇ ರೀತಿಯ ವೇತನ ಶ್ರೇಣಿ ನಿಗದಿಪಡಿಸಿದ್ದು, ಅದೇ ರೀತಿಯಾಗಿ ಸರ್ಕಾರದ ಇತರೆ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ಹೊಂದಿರುವ ಸಿಬ್ಬಂದಿಗಳಿಗೆ ಒಂದೇ ರೀತಿಯ ವೇತನ ಶ್ರೇಣಿ | |

| | | |
|---|---|---|
| | ನಿಗದಿಪಡಿಸುವ ಕುರಿತು ಸರ್ಕಾರದ ನಿಲುವೇನು? | ಬದಲಾಯಿಸಿ ಬೇರೆ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಅವಕಾಶವಿರುವುದಿಲ್ಲ. ಆದುದರಿಂದ, ಸರ್ಕಾರದ ವಿವಿಧ ಇಲಾಖೆಗಳಲ್ಲಿ ಡಿಪ್ಲೋಮ ಮತ್ತು ಸ್ನಾತಕೋತ್ತರ ಪದವಿ ವಿದ್ಯಾರ್ಹತೆಯೊಂದಿಗೆ ಕಾರ್ಯನಿರ್ವಹಿಸುತ್ತಿರುವ ನೌಕರರು ಅವರು ಧಾರಣೆ ಮಾಡಿರುವ ಹುದ್ದೆಗೆ ಅನ್ವಯಿಸುವ ವೇತನ ಶ್ರೇಣಿಯಲ್ಲಿ ವೇತನ ಪಡೆಯಲು ಅರ್ಹರಿರುತ್ತಾರೆ. |

ಸಂ: ಸಿಆಸುಇ **32 ಸೇಎಡಿ** 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ